# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1516
ಸದಸ್ಯರ ಹೆಸರು : ಶ್ರೀ ಆಯನೂರು ಮಂಜುನಾಥ್
(ಪದವೀಧರರ ಕ್ಷೇತ್ರ)
ಉತ್ತರಿಸುವ ದಿನಾಂಕ : 10.03.2022.
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಸೇವೆ ಸಲ್ಲಿಸಿ ನಿವೃತ್ತರಾದ ಸೈನಿಕರಿಗೆ ಸಾಗುವಳಿ ಮಾಡಿ ಕೃಷಿಕ ಜೀವನ ನಡೆಸಲು ಭೂಮಿಯನ್ನು ನೀಡುವ ಕಾಯ್ದೆ ಪದ್ಧತಿ ಜಾರಿಯಲ್ಲಿದೆಯೇ; ಹಾಗಿದ್ದಲ್ಲಿ, ರಾಜ್ಯದ ಯಾವ ಯಾವ ಜಿಲ್ಲೆಯಲ್ಲಿ ಭೂಮಿಗಾಗಿ ಅರ್ಜಿ ಸಲ್ಲಿಸಿದ ಯೋಧರ ವಿವರ ಹಾಗೂ ಮಂಜೂರು ಮಾಡಲಾದ ಭೂಮಿಯಷ್ಟು; (ವಿವರವಾದ ಮಾಹಿತಿಯನ್ನು ನೀಡುವುದು) | ವಿವರಗಳನ್ನು ಅನುಬಂಧದಲ್ಲಿ ಒದಗಿಸಿದೆ. |
| ಆ) | ಅಂದಿನ ಮೈಸೂರು ಸರ್ಕಾರದಲ್ಲಿ ಬೆಂಗಳೂರು, ಮೈಸೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ಯೋಧರಿಗೆ ಮಂಜೂರು ಮಾಡಲಾದ ಭೂಮಿ ಎಷ್ಟು; (ವಿವರ ನೀಡುವುದು) | ಮೈಸೂರು ರಾಜರ ಆಡಳಿತಾವಧಿಯಲ್ಲಿ ಕೋಲಾರ ಜಿಲ್ಲೆಯಲ್ಲಿ ಯಾವುದೇ ಭೂಮಿಯನ್ನು ಯೋಧರಿಗೆ ಮಂಜೂರು ಮಾಡಿರುವುದಿಲ್ಲ.<br><br>ಮೈಸೂರು ರಾಜರ ಆಡಳಿತಾವಧಿಯಲ್ಲಿ ಬೆಂಗಳೂರು ನಗರ ಜಿಲ್ಲೆಯಲ್ಲಿ ಮಾಜಿ ಸೈನಿಕರಿಗೆ 1-20 ಎಕರೆ/ ಗುಂಟೆ ಜಮೀನನ್ನು ದಿನಾಂಕ: 20.04.1961ರಲ್ಲಿ ಮಂಜೂರು ಮಾಡಲಾಗಿದೆ.<br><br>ಮೈಸೂರು ರಾಜರ ಆಡಳಿತಾವಧಿಯಲ್ಲಿ ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನಲ್ಲಿ 284 ಪ್ರಕರಣಗಳಲ್ಲಿ ಯೋಧರಿಗೆ ಜಮೀನು ಮಂಜೂರು ಮಾಡಲಾಗಿರುತ್ತದೆ. |
| ಇ) | ಬೆಂಗಳೂರು ಜಿಲ್ಲೆಗಳಲ್ಲಿ ಸೈನಿಕರಿಗೆ ನೀಡಲಾದ ಭೂಮಿಯನ್ನು ಸರ್ಕಾರ ವಶಪಡಿಸಿಕೊಂಡು ಬಿ.ಡಿ.ಎ ಮೂಲಕ ಅಂಗ ಸಂಸ್ಥೆಗಳು ಹಾಗೂ ಇತರರಿಗೆ ನಿವೇಶನ ಹಂಚಿಕೆ ಮಾಡಿದೆಯೇ; ಹಾಗಿದ್ದಲ್ಲಿ, ವಿವರವಾದ ಮಾಹಿತಿಯನ್ನು ನೀಡುವುದು? | ಅನ್ವಯಿಸುವುದಿಲ್ಲ. |
| ಈ) | ಸೈನಿಕರಿಗೆ ನೀಡಲಾದ ಭೂಮಿಯನ್ನು ಖಾಸಗಿ ವ್ಯಕ್ತಿಗಳಾಗಲಿ, ಸಂಸ್ಥೆಗಳಾಗಲಿ ಅಥವಾ ಸರ್ಕಾರವಾಗಲಿ ವಶಪಡಿಸಿಕೊಂಡಿದ್ದ ಪಕ್ಷದಲ್ಲಿ ಮಾಜಿ ಸೈನಿಕರಿಗೆ ಸರ್ಕಾರ ಯಾವ ರೀತಿಯ ರಕ್ಷಣೆಯನ್ನು ನೀಡುವುದು? (ಮಾಹಿತಿ ನೀಡುವುದು) | ಮಾಜಿ ಸೈನಿಕರಿಗೆ ಮಂಜೂರು ಮಾಡಿರುವ ಜಮೀನಿನಲ್ಲಿ ಅನಧಿಕೃತ ಸಾಗುವಳಿ ಸಕ್ರಮೀಕರಣಕ್ಕಾಗಿ ನಮೂನೆ-50, 53 ಮತ್ತು 57ರಲ್ಲಿ ಅರ್ಜಿ ಸಲ್ಲಿಸಿದ್ದು, ಅಂತಹ ಜಮೀನುಗಳು ಮಂಜೂರಾದ ಮಾಜಿ ಸೈನಿಕರಿಗೆ ವಶಕ್ಕೆ ನೀಡಲು ಅಡ್ಡಿಯಾಗಿದ್ದಲ್ಲಿ, ಅನಧಿಕೃತ |

| | | |
|---|---|---|
| | | ಸಾಗುವಳಿದಾರರು ಅರ್ಹ ಫಲಾನುಭವಿಗಳಾಗಿದ್ದಲ್ಲಿ ಮಾಜಿ ಸೈನಿಕರಿಗೆ ಭೂ ಲಭ್ಯತಾ ಪಟ್ಟಿ ಪ್ರಕಾರ ಬದಲಿ ಜಮೀನನ್ನು ನೀಡಲು ಕ್ರಮವಹಿಸಲಾಗುವುದು ಹಾಗೂ ಭೂ ಲಭ್ಯತಾ ಪಟ್ಟಿಯ ಪ್ರಕಾರ ಸರ್ಕಾರಿ ಜಮೀನು ಮಂಜೂರು ಮಾಡಲು ಲಭ್ಯವಿಲ್ಲದಿದ್ದಲ್ಲಿ, ಮಾಜಿ ಸೈನಿಕರಿಗೆ ಬೆಂಗಳೂರು ನಗರ ಜಿಲ್ಲೆಯನ್ನು ಹೊರತುಪಡಿಸಿ ನಗರ ಪ್ರದೇಶದಲ್ಲಿ 1200 ಚದರ ಅಡಿ ವಿಸ್ತೀರ್ಣದ ಹಾಗೂ ಗ್ರಾಮಾಂತರ ಪ್ರದೇಶದಲ್ಲಿ 2400 ಚದರ ಅಡಿ ವಿಸ್ತೀರ್ಣದ ನಿವೇಶನವನ್ನು ಜಾರಿಯಲ್ಲಿರುವ ಆಶ್ರಯ ಯೋಜನೆಯಡಿಯಲ್ಲಿ ನಿವೇಶನವನ್ನು ಉಚಿತವಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 8(8)ರನ್ವಯ ಮಂಜೂರು ಮಾಡಲು ಕ್ರಮವಹಿಸಲಾಗುವುದು.<br><br>ಒಂದುವೇಳೆ ಮಾಜಿ ಸೈನಿಕರಿಗೆ ಮಂಜೂರು ಮಾಡಿದ ಜಮೀನಿನಲ್ಲಿ ಅನಧಿಕೃತ ಸಾಗುವಳಿ ಸಕ್ರಮೀಕರಣಕ್ಕಾಗಿ ಸಲ್ಲಿಸಿರುವ ಅರ್ಜಿಗಳು ಅನರ್ಹವಾಗಿದ್ದಲ್ಲಿ, ಅಂತಹ ಅರ್ಜಿಗಳನ್ನು ವಜಾಗೊಳಿಸಿ ಅನಧಿಕೃತ ಒತ್ತುವರಿಯನ್ನು ತೆರವುಗೊಳಿಸಿ ಮಾಜಿ ಸೈನಿಕರ ವಶಕ್ಕೆ ನೀಡಲಾಗುವುದು. |

ಸಂಖ್ಯೆ: ಆರ್‌ಡಿ 94 ಎಲ್‌ಜಿಕ್ಯೂ 2022

(ಆರ್.ಅಶೋಕ)
ಕಂದಾಯ ಸಚಿವರು